ಕೊನ್‌ಸ್ತಂತೀನ್ ಪೌಸ್ತೋವ್‌ಸ್ಕಿ

# ಕೆದರಿದ ಪುಕ್ಕದ ಗುಬ್ಬಚ್ಚಿ

ಅನುವಾದ: ಕೆ.ಎಲ್. ಗೋಪಾಲಕೃಷ್ಣರಾವ್
ಚಿತ್ರಗಳು: ವಲೇರಿ ಪೆರೆಬೇರಿನ್,
ಸ್ಪಾರ್ತಕ್ ಕಲಚೇವ್





ರಾದುಗ ಪ್ರಕಾಶನ
ಮಾಸ್ಕೋ



ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.
ಬೆಂಗಳೂರು

ಪುಟ್ಟ ಮಾಷಳ ಕೋಣೆಯಲ್ಲಿ ಗೋಡೆಯ ಮೇಲೆ ಒಂದು ಹಳೆಯ ಗೋಡೆ ಗಡಿಯಾರವಿದ್ದಿತು. ಅದೊಂದು ತಮಾಷಿಯ ಗಡಿಯಾರ. ಅದರಲ್ಲೊಬ್ಬ ಪುಟ್ಟ ಕಬ್ಬಿಣದ ಕಮ್ಮಾರನಿದ್ದ. ಪುಟ್ಟ ಆಟದ ಸೈನಿಕನಿರುವುದಿಲ್ಲವೇ ಅಷ್ಟು ಗಾತ್ರದವ. ಅವನ ಕೈಯಲ್ಲೊಂದು ಬಡಿಗೆ ಇದ್ದಿತು. ಗಡಿಯಾರ ಟಿಕ್‌ಟಿಕ್ ಅಂದುಕೊಂಡು ನಡೆಯುತ್ತ ಗಂಟೆ ಹೊಡೆಯಬೇಕಾಗಿ ಬಂದಾಗ ಈ ಕಮ್ಮಾರನ ಕೈಯಲ್ಲಿದ್ದ ಬಡಿಗೆ ಅದರ ಮುಂದಿದ್ದ ಪುಟ್ಟ ಹಿತ್ತಾಳೆಯ ಬಡಿಗಲ್ಲಿನ ಮೇಲೆ ಬಡಿಯುತ್ತಿತ್ತು ತಕ್ಷಣವೇ ಕೋಣೆಯಲ್ಲೆಲ್ಲ ಶಬ್ದ ತುಂಬುತ್ತಿತ್ತು. ಆ ಶಬ್ದ ಪುಸ್ತಕದ ಕಪಾಟಿನ ಕೆಳಗಿನವರೆಗೂ ನುಸುಳಿಕೊಂಡು ಹೋಗಿ ಆಮೇಲೆ ಕೇಳದಂತಾಗುತ್ತಿತ್ತು.

ಗಡಿಯಾರದ ಕಮ್ಮಾರ ಬಡಿಗಲ್ಲಿನ ಮೇಲೆ ಎಂಟು ಬಾರಿ ಬಡಿದ. ಒಂಬತ್ತನೆಯ ಬಾರಿಯೂ ಬಡಿಯಲು ಹೊರಟಿದ್ದ. ಆದರೆ ತಕ್ಷಣವೇ ಅವನ ಕೈ ಸೆಳೆತಕ್ಕೆ ಒಳಗಾದಂತೆ ಗಾಳಿಯಲ್ಲಿ ಹಾಗೇ ನಿಂತಿತು. ಕಮ್ಮಾರ ಹೀಗೆ ಕೈ ಎತ್ತಿ ಹಿಡಿದೇ ಇಡೀ ಒಂದು ಗಂಟೆ ನಿಂತಿರಬೇಕಿದ್ದಿತು, ಬಡಿಗಲ್ಲಿನ ಮೇಲೆ ಒಂಬತ್ತು ಬಾರಿ ಬಡಿಯುವ ಕಾಲ ಬರುವವರೆಗೂ ಹಾಗೆಯೇ ನಿಂತಿರಬೇಕಿದ್ದಿತು.

ಮಾಷ ಕಿಟಕಿಯ ಬಳಿ ನಿಂತಿದ್ದಳು. ಆದರೆ ಸುತ್ತ ತಿರುಗಲಿಲ್ಲ. ತಿರುಗಿದ್ದರೆ ಅವಳ ದಾದಿ ಪೆತ್ರೋವ್ನಳಿಗೆ ಎಚ್ಚರವಾಗಿ ಬಿಡುತ್ತಿತ್ತು. ಅವಳು ಮಾಷಳನ್ನು ಮತ್ತೆ ಹಾಸಿಗೆಯಲ್ಲಿ ಮಲಗುವಂತೆ ಮಾಡಿಬಿಡುತ್ತಿದ್ದಳು.

ಪೆತ್ರೋವ್ನ ಸೋಫಾದ ಮೇಲೆ ಕುಳಿತೇ ನಸು ನಿದ್ದೆ ಮಾಡುತ್ತಿದ್ದಳು. ಮಾಷಳ ಅಮ್ಮ ಒಬ್ಬ ಬ್ಯಾಲೇ ನರ್ತಕಿ. ಅವಳು ಯಾವತ್ತಿನಂತೆ ಅಂದೂ ಆಗಲೇ ರಂಗಮಂದಿರಕ್ಕೆ ಹೊರಟು ಹೋಗಿದ್ದಳು. ಅವಳು ಎಂದೂ ಮಾಷಳನ್ನು ಅಲ್ಲಿಗೆ ತನ್ನೊಂದಿಗೆ ಕರೆದೊಯ್ಯುತ್ತಿರಲಿಲ್ಲ.

ಅವಳು ಹೋಗುತ್ತಿದ್ದ ರಂಗಮಂದಿರ ಬಹಳ ದೊಡ್ಡದಾಗಿತ್ತು. ಅದರ ಮುಂಭಾಗದಲ್ಲಿ ಕಲ್ಲಿನ ಕಂಬಗಳಿದ್ದವು. ಮೇಲೆ, ಚಾವಣಿಯ ಮೇಲೆ, ನಾಲ್ಕು ಎರಕದ ಕಬ್ಬಿಣದ ಕುದುರೆಗಳು ತಮ್ಮ ಮುಂಗಾಲುಗಳನ್ನು ಮೇಲೆ ಎತ್ತಿ ಹಿಡಿದು ನಿಂತಿದ್ದವು. ಲಾರೆಲ್ ಎಲೆಗಳ ಹಾರವನ್ನು ತಲೆಗೆ ಕಟ್ಟಿಕೊಂಡಿದ್ದ ಒಬ್ಬ



ಮನುಷ್ಯ ಈ ಕುದುರೆಗಳನ್ನು ಹಿಡಿದಿರಿಸಿದ್ದ. ಅವನು ತುಂಬ ಬಲಶಾಲಿಯೂ ಧೈರ್ಯಶಾಲಿಯೂ ಆಗಿದ್ದಿರಬೇಕು. ಕುದುರೆಗಳನ್ನು ಚಾವಣಿಯ ಅಂಚಿನವರೆಗೂ ಕರೆದು ತಂದು ಅಲ್ಲಿ ಲಗಾಮು ಹಿಡಿದೆಳೆದು ನಿಲ್ಲಿಸಿದ್ದ. ಹಾಗೆ ಮಾಡದೆ ಹೋಗಿದ್ದಿದ್ದರೆ ಎಷ್ಟು ದಾಂದಲೆ ಆಗುತ್ತಿತ್ತೆಂಬುದನ್ನು ಮಾಷ ಎಷ್ಟೋ ಬಾರಿ ಊಹಿಸಲು ಯತ್ನಿಸಿದ್ದಳು. ಅವು ಚಾವಣಿಯಿಂದ ನಾಗಾಲೋಟ ಓಡಿಕೊಂಡು ಕೆಳಕ್ಕೆ, ಚೌಕಕ್ಕೆ, ಬರುತ್ತಿದ್ದವು. ಅವುಗಳ ಖುರಪುಟ ಧ್ವನಿ ಗುಡುಗಿನಂತೆ ಮೊಳಗುತ್ತಿತ್ತು.

ಮಾಷಳ ಅಮ್ಮ ಕಳೆದ ಕೆಲವು ದಿನಗಳಿಂದ ತುಂಬ ತಳಮಳಕ್ಕೊಳಗಾಗಿದ್ದಳು. ಅವಳು ಅದೇ ಮೊದಲ ಬಾರಿಗೆ ಸಿಂಡರೆಲಾ ಪಾತ್ರ ನರ್ತಿಸಲಿದ್ದಳು. ಮೊದಲ ದಿನದ ಪ್ರದರ್ಶನಕ್ಕೆ ಪೆತ್ರೋವ್ನಳನ್ನೂ ಮಾಷಳನ್ನೂ ಕರೆದುಕೊಂಡು ಹೋಗುವುದಾಗಿ ಮಾತು ಕೊಟ್ಟಿದ್ದಳು.

ಮೊದಲ ಪ್ರದರ್ಶನಕ್ಕೆ ಎರಡು ದಿನಗಳ ಮುಂಚೆ ಅಮ್ಮ ಸಂದೂಕಿನ ಒಳಗಿನಿಂದ ಒಂದು ಪುಟ್ಟ ತೆಳುವಾದ ಗಾಜಿನ ತುರಾಯಿಯನ್ನು ಹೊರ ತೆಗೆದಿದ್ದಳು. ಅದೊಂದು ಸಣ್ಣ ಸುಂದರವಾದ ಬ್ರೋಚ್‌ನಂತಿತ್ತು. ಅದನ್ನು ಮಾಷಳ ಅಪ್ಪ ಅವಳ ತಾಯಿಗೆ ಕೊಟ್ಟಿದ್ದ. ಅವನೊಬ್ಬ ನಾವಿಕ. ಅದನ್ನು ಅವನು ಯಾವುದೋ ದೂರದ ನಾಡಿನಿಂದ ತಂದಿದ್ದ.

ಆಮೇಲೆ ಮಾಷಳ ಅಪ್ಪ ಯುದ್ಧಕ್ಕೆ ಹೊರಟು ಹೋಗಿದ್ದ. ಅವನು ಅನೇಕ ನಾಜೀ ಹಡಗುಗಳನ್ನು ಮುಳುಗಿಸಿದ್ದ. ತಾನೇ ಎರಡು ಬಾರಿ ಮುಳುಗಿದ್ದ. ಮಾಷಳ ಅಪ್ಪನಿಗೆ ಗಾಯವಾಯಿತು, ಆದರೆ ಬೇಗನೆಯೇ ಗುಣಮುಖನಾದ. ಈಗ ಅವನು ಕಮ್ಚಾಟ್ಕ ಎಂಬ ಪ್ರದೇಶಕ್ಕೆ ಪ್ರಯಾಣ ಹೋಗಿದ್ದ. ಆದರೆ ವಸಂತ ಕಾಲದ ಹೊತ್ತಿಗೆ ಹಿಂದಿರುಗಲಿದ್ದ.

ಮಾಷಳ ಅಮ್ಮ ಆ ಗಾಜಿನ ತುರಾಯಿಯನ್ನು ಹೊರ ತೆಗೆದು ಅದಕ್ಕೆ ಮೆಲ್ಲಗೆ ಏನನ್ನೋ ಹೇಳಿದಳು. ಅದು ತುಂಬ ವಿಚಿತ್ರವಾಗಿತ್ತು. ಅವಳು ಆ ಮುನ್ನ ಎಂದೂ ನಿರ್ಜೀವ ವಸ್ತುಗಳ ಜೊತೆ ಹಾಗೆ ಮಾತನಾಡಿರಲಿಲ್ಲ.

"ಸರಿ, ನೋಡಿದೆಯಾ? ಇನ್ನು ನೀನು ಹೆಚ್ಚು ಕಾಲ ಕಾಯಬೇಕಿಲ್ಲ" ಎಂದವಳು ಅದಕ್ಕೆ ಪಿಸುಮಾತಿನಲ್ಲಿ ಹೇಳಿದಳು.

"ಯಾತಕ್ಕೆ ಕಾಯಬೇಕಿಲ್ಲ?" ಮಾಷ ಕೇಳಿದಳು.

"ನೀನು ಇನ್ನೂ ತುಂಬ ಚಿಕ್ಕವಳು. ನಿನಗೆ ಅದೆಲ್ಲ ಅರ್ಥವಾಗುವುದಿಲ್ಲ" ಅಮ್ಮ ಹೇಳಿದಳು. "ಅಪ್ಪ ಈ ತುರಾಯಿಯನ್ನು ಕೊಟ್ಟಾಗ ಹೇಳಿದ್ದರು: 'ನೀನು ಮೊದಲ ಬಾರಿಗೆ ಸಿಂಡರೆಲಾ ಪಾತ್ರ ನರ್ತಿಸುವಾಗ ಸಮೂಹನೃತ್ಯದ ದೃಶ್ಯವಾದ ಮೇಲೆ ಈ ಗಾಜಿನ ತುರಾಯಿಯನ್ನು ನಿನ್ನ ಫ್ರಾಕಿಗೆ ಸಿಕ್ಕಿಸಿಕೊಳ್ಳುವುದನ್ನು ಮರೆಯಬೇಡ. ಆಗ ನೀನು ನನ್ನ ಬಗೆಗೆ ಯೋಚಿಸುತ್ತಿದ್ದೀಯ ಅಂತ ನನಗೆ ಗೊತ್ತಾಗುತ್ತೆ.' "

"ಸರಿ. ಇದರಲ್ಲಿ ಅರ್ಥವಾಗದೆ ಇರುವುದು ಏನಿದೆ?" ಮಾಷ ತುಸು ರೇಗಿದವಳಂತೆ ಕೇಳಿದಳು.



"ನಿನಗೆ ಏನು ಅರ್ಥವಾಯಿತು?"

"ಎಲ್ಲ!" ಮಾಷ ಅಂದಳು. ಅವಳ ಮುಖ ಕೆಂಪೇರಿತು. ತನ್ನ ಮಾತು ನಂಬದಿದ್ದುದನ್ನು ಅವಳು ಸಹಿಸದಾಗಿದ್ದಳು.

ಅಮ್ಮ ಆ ಪುಟ್ಟ ಗಾಜಿನ ತುರಾಯಿಯನ್ನು ತನ್ನ ಡ್ರೆಸಿಂಗ್ ಟೇಬಲ್ ಮೇಲೆ ಇರಿಸಿ ಅದನ್ನು ಕಿರುಬೆರಳಿನಿಂದ ಕೂಡ ಮುಟ್ಟದಿರುವಂತೆ ಮಾಷಳಿಗೆ ಹೇಳಿದ್ದಳು. ಏಕೆಂದರೆ ಅದು ತುಂಬ ಸೂಕ್ಷ್ಮವಾಗಿತ್ತು. ಒರಟಾಗಿ ಆಡಿಸಿದರೆ ಮುರಿಯುವುದಿದ್ದಿತು.

ಈಗ ಸಂಜೆಯಾಗಿತ್ತು. ಆ ಗಾಜಿನ ತುರಾಯಿ ಮಾಷಳ ಬೆನ್ನಿನ ಹಿಂದೆ ಡ್ರೆಸಿಂಗ್ ಟೇಬಲ್ ಮೇಲಿತ್ತು, ಹೊಳೆಯುತ್ತಿತ್ತು. ಎಲ್ಲ ತುಂಬ ನಿಶ್ಶಬ್ದವಾಗಿತ್ತು. ಇಡೀ ಪ್ರಪಂಚವೇ ಮಲಗಿದ್ದಂತೆ ಕಂಡುಬರುತ್ತಿತ್ತು. ಮನೆ, ಕೆಳಗಿನ ತೋಟ, ಗೇಟಿನ ಮುಂದೆ ಕಾವಲಿದ್ದ ಕಲ್ಲಿನ ಸಿಂಹ, ಎಲ್ಲ ಮಲಗಿದ್ದಂತೆ ಕಂಡುಬರುತ್ತಿದ್ದವು. ಆ ಕಲ್ಲಿನ ಸಿಂಹ ಘಳಿಗೆಘಳಿಗೆಗೂ ಹೆಚ್ಚು ಬೆಳ್ಳಗಾಗುತ್ತಿತ್ತು. ಏಕೆಂದರೆ ಅದರ ಮೇಲೆ ಸತತವಾಗಿ ಮಂಜು ಬೀಳುತ್ತಿತ್ತು. ಮಾಷ, ರೇಡಿಯೇಟರ್* ಮತ್ತು ಚಳಿಗಾಲ – ಇವಿಷ್ಟೆ ಎಚ್ಚರವಾಗಿದ್ದುದು. ಮಾಷ ಕಿಟಕಿಯಿಂದ ಹೊರಗೆ ನೋಡುತ್ತಿದ್ದಳು. ರೇಡಿಯೇಟರ್ ಕೋಣೆಯೊಳಗೆ ಮೃದುವಾಗಿ ತನ್ನ ಬೆಚ್ಚಗಿನ ಹಾಡು ಹಾಡುತ್ತಿತ್ತು. ಚಳಿಗಾಲ ಬಿಳಿಯ ಮಂಜಿನ ಚಕ್ಕೆಗಳನ್ನು ಆಕಾಶದಿಂದ ಸತತವಾಗಿ ಕೆಳಕ್ಕೆ ಬೀಳಿಸುತ್ತಿತ್ತು. ಈ ಮಂಜಿನ ಚಕ್ಕೆಗಳು ಬೀದಿಲಾಂದ್ರಗಳ ಬಳಿಯಿಂದ ತೇಲಿಕೊಂಡು ಬಂದು ನೆಲದ ಮೇಲೆ ಕೂರುತ್ತಿದ್ದವು. ಆಕಾಶ ಎಷ್ಟು ಕಪ್ಪಗಿದೆ, ಆದರೆ ಅದರಿಂದ ಈ ಬಿಳಿ ಮಂಜು ಹೇಗೆ ಬೀಳುತ್ತೋ, ಅದು ಮಾಷಳಿಗೆ ಅರ್ಥವಾಗಲಿಲ್ಲ. ಅಲ್ಲದೆ ಚಳಿಗಾಲದ ಈ ಹಿಮಪಾತದ ಮಧ್ಯೆ ಅಮ್ಮನ ಡ್ರೆಸಿಂಗ್ ಟೇಬಲ್ ಮೇಲಿದ್ದ ಬುಟ್ಟಿಯಲ್ಲಿ ದೊಡ್ಡ ಕೆಂಪು ಹೂಗಳು ಅರಳಲು ಹೇಗೆ ಸಾಧ್ಯವಾಯಿತೋ ಅದು ಕೂಡ ಮಾಷಳನ್ನು ಆಶ್ಚರ್ಯಗೊಳಿಸಿದ್ದಿತು. ಆದರೆ ಇವೆಲ್ಲಕ್ಕಿಂತ ಮಾಷಳನ್ನು ಹೆಚ್ಚು ಗೊಂದಲಗೊಳಿಸಿದ್ದುದೆಂದರೆ ಆ ಮುದಿ ಬೂದು ಕಾಗೆ. ಅದು ಕಿಟಕಿಯ ಎದುರು ಮರದ ಕೊಂಬೆಯ ಮೇಲೆ ಕುಳಿತು ಕಣ್ಣು ಮಿಟುಕಿಸದೆಯೇ ಮಾಷಳನ್ನೇ ದುರುಗುಟ್ಟಿಕೊಂಡು ನೋಡುತ್ತಿದ್ದಿತು. ರಾತ್ರಿ ಹೊತ್ತಿನಲ್ಲಿ ಕೋಣೆಯೊಳಕ್ಕೆ ಹಚ್ಚ ಹೊಸ ಗಾಳಿ ಬರಲೆಂದು ಪೆತ್ರೋವ್ನ ಮೇಲಿನ ಪುಟ್ಟ ಕಿಟಕಿಯ ಬಾಗಿಲು ತೆರೆಯಲೆಂದೇ ಅದು ಕಾಯುತ್ತಿತ್ತು. ಪೆತ್ರೋವ್ನ ಸಾಮಾನ್ಯವಾಗಿ ಈ ಬಾಗಿಲು ತೆರೆದು ಆಮೇಲೆ ಮಾಷಳನ್ನು ಹಲ್ಲುಜ್ಜಲು ಮತ್ತು ಮುಖ ತೊಳೆಯಲು ಬಚ್ಚಲಮನೆಗೆ ಕರೆದೊಯ್ಯುತ್ತಿದ್ದಳು.

ಪೆತ್ರೋವ್ನ ಹಾಗೂ ಮಾಷ ಕೋಣೆ ಬಿಟ್ಟು ಹೊರ ಹೋದ ಕೂಡಲೇ ಕಾಗೆ ಪುಟ್ಟ ಕಿಟಕಿಯ ಮೂಲಕ ತೂರಿಕೊಂಡು ಒಳಬರುತ್ತಿತ್ತು, ತನಗೆ ತಕ್ಷಣವೇ

---

*ಚಳಿಗಾಲದಲ್ಲಿ ಕೋಣೆಯನ್ನು ಬೆಚ್ಚಗಿರಿಸಲು ಏರ್ಪಡಿಸಿದ ಶಾಖ ಪ್ರಸಾರಕ. – ಸಂ.



ಸಿಕ್ಕಿದ ಯಾವುದಾದರೂ ವಸ್ತುವನ್ನು ಕಚ್ಚಿಕೊಂಡು ಬೇಗ ತಾನು ಬಂದ ದಾರಿಯಲ್ಲೇ ಹೊರಕ್ಕೆ ಹಾರಿ ಹೋಗಿ ಬಿಡುತ್ತಿದ್ದಿತು. ಕಾಗೆ ತನ್ನ ಈ ಕಳ್ಳತನದ ಕೆಲಸ ಮಾಡಲು ಎಷ್ಟು ಆತುರವಾಗಿರುತ್ತಿದ್ದಿತೆಂದರೆ ಒಳಗೆ ಬರುವಾಗ ಅದು ತನ್ನ ಪಾದಗಳನ್ನು ರಗ್ಗಿಗೆ ಒರಸುವುದನ್ನೇ ಮರೆಯುತ್ತಿದ್ದಿತು. ಹಾಗಾಗಿ ಅದರ ಒದ್ದೆಯಾದ ಪಾದದ ಗುರುತುಗಳು ಮೇಜಿನ ಮೇಲೆ ಉಳಿಯುತ್ತಿದ್ದವು.

ಪೆತ್ರೋವ್ನ ಕೋಣೆಯೊಳಕ್ಕೆ ಹಿಂದಿರುಗಿದಾಗ ಅವಳಿಗೆ ಈ ಪಾದಗಳ ಗುರುತುಗಳು ಕಾಣುತ್ತಿದ್ದವು. ಅವಳು ಕೂಡಲೇ ಕೈಗಳನ್ನು ಮೇಲಕ್ಕೆ ಚೆಲ್ಲಿ ಕೂಗಿ ಹೇಳುತ್ತಿದ್ದಳು: "ಕಳ್ಳ ಕಾಗೆ ! ಮತ್ತೆ ಏನನ್ನೋ ಕದ್ದುಕೊಂಡು ಹೋಗಿದೆ !"

ಮಾಷಳೂ ತನ್ನ ಕೈಗಳನ್ನು ಮೇಲಕ್ಕೆ ಚೆಲ್ಲುತ್ತಿದ್ದಳು. ಈ ಬಾರಿ ಕಾಗೆ ಏನನ್ನು ಕದ್ದುಕೊಂಡು ಹೋಗಿದ್ದಿತು ಅಂತ ಇಬ್ಬರೂ ಬೇಗ ಬೇಗ ಹುಡುಕ ತೊಡಗುತ್ತಿದ್ದರು. ಅದು ಸಾಮಾನ್ಯವಾಗಿ ಕೋಣೆಯೊಳಗೆ ಅಲ್ಲಿ ಇಲ್ಲಿ ಬಿದ್ದಿರಬಹುದಾಗಿದ್ದ ಆಹಾರದ ತುಣುಕುಗಳನ್ನು ಕಚ್ಚಿಕೊಂಡು ಹೋಗುತ್ತಿದ್ದಿತು – ಬಹುಶಃ ಒಂದು ಸಣ್ಣ ಸೀರೊಟ್ಟಿಯ ತುಣುಕು, ಇಲ್ಲವೇ ಒಂದು ಪುಟ್ಟ ಸಕ್ಕರೆ ಹಳಕು, ಇತ್ಯಾದಿ.

ಈ ಕಾಗೆ ಸಮೀಪದಲ್ಲೇ ಇದ್ದ ಒಂದು ಐಸ್‌ಕ್ರೀಂ ಪೆಟ್ಟಿಗೆ ಅಂಗಡಿಯಲ್ಲಿ ಗೂಡು ಮಾಡಿಕೊಂಡಿದ್ದಿತು. ಈ ಅಂಗಡಿಯನ್ನು ಚಳಿಗಾಲಕ್ಕೆಂದು ಮುಚ್ಚಿರಲಾಗಿತ್ತು. ಈ ಕಾಗೆ ಒಂದು ಕೋಪಿಷ್ಠ, ಕೃಪಣ ಮುದಿ ಕಾಗೆ. ಅದು ಆ ಅಂಗಡಿಯ ಸಂದುಗೊಂದುಗಳಲ್ಲಿ ತಾನು ಕದ್ದು ತಂದಿದ್ದ ವಸ್ತುಗಳನ್ನೆಲ್ಲ ಅಡಗಿಸಿಟ್ಟಿದ್ದಿತು. ಅಕ್ಕಪಕ್ಕದ ಗುಬ್ಬಚ್ಚಿಗಳು ಅವನ್ನು ಕದ್ದುಕೊಂಡು ಹೋಗದಿರಲೆಂದು ಹಾಗೆ ಮಾಡುತ್ತಿದ್ದಿತು.

ಕೆಲವು ವೇಳೆ ಈ ಕಾಗೆಗೆ ಕೆಟ್ಟ ಕನಸು ಬೀಳುತ್ತಿತ್ತು. ಗುಬ್ಬಚ್ಚಿಗಳೆಲ್ಲ ಹೇಗೋ ತನ್ನ ಗೂಡಿನೊಳಕ್ಕೆ ಬಂದು ಬಿಟ್ಟಿವೆ, ತಾನು ಸಂದುಗೊಂದುಗಳಲ್ಲೆಲ್ಲ ತುರುಕಿ ಇರಿಸಿದ್ದ ಸೇಬಿನ ಹಣ್ಣಿನ ಸಿಪ್ಪೆಯ ಚೂರುಗಳು, ಹೆಪ್ಪುಗಟ್ಟಿದ ಸಾಸೇಜ್ ತುಣುಕುಗಳು ಇಲ್ಲವೇ ಮಿಠಾಯಿ ಸುತ್ತಿದ್ದ ಕಾಗದದ ಚೂರುಗಳು ಇವುಗಳನ್ನೆಲ್ಲ ಕದ್ದೊಯ್ಯುತ್ತಿವೆ, ಎಂದು ಅದಕ್ಕೆ ಕನಸು ಬೀಳುತ್ತಿದ್ದಿತು. ಆಗ ಕಾಗೆ ನಿದ್ರೆಯಲ್ಲೇ ಗಟ್ಟಿಯಾಗಿ ಕೋಪದಿಂದ ಅರಚುತ್ತಿತ್ತು. ಮೂಲೆಯಲ್ಲಿ ಪಹರೆ ಮಾಡುತ್ತಿದ್ದ ಪೊಲೀಸ್‌ಮನ್ ಈ ಕೂಗು ಕೇಳಿ ಚುರುಕಾಗುತ್ತಿದ್ದ. ಶಬ್ದವನ್ನೇ ಕಿವಿಗೊಟ್ಟು ಕೇಳಿ ಸುತ್ತ ಕಣ್ಣೋಡಿಸುತ್ತಿದ್ದ. ನಡು ರಾತ್ರಿಯಲ್ಲಿ ಕಾಗೆ ಕೂಗುವುದೆಂದರೇನು ? ಅವನು ತಬ್ಬಿಬ್ಬಾಗುತ್ತಿದ್ದ. ಆ ಪೆಟ್ಟಿಗೆ ಅಂಗಡಿಯ ಬಳಿ ಹೋಗಿ, ಬೀದಿದೀಪದ ಬೆಳಕಿಗೆ ತನ್ನ ಕೈಗಳನ್ನು ಅಡ್ಡಮಾಡಿಕೊಂಡು, ಒಳಗೆ ಇಣಿಕಿ ನೋಡುತ್ತಿದ್ದ. ಒಳಗೆಲ್ಲ ಕತ್ತಲಾಗಿರುತ್ತಿತ್ತು. ಅವನಿಗೆ ನೆಲದ ಮೇಲೆ ಕಾಣುತ್ತಿದ್ದುದೆಲ್ಲ ಮುರಿದ ಪೆಟ್ಟಿಗೆಗಳು.

ಒಂದು ದಿನ ಕಾಗೆ ತನ್ನ ಈ ಪೆಟ್ಟಿಗೆ ಅಂಗಡಿಯಲ್ಲಿ ಕೆದರಿದ ಪುಕ್ಕದ ಒಂದು ಪುಟ್ಟ ಗುಬ್ಬಚ್ಚಿಯನ್ನು ಕಂಡಿತು. ಆ ಗುಬ್ಬಚ್ಚಿಯ ಹೆಸರು ಪಾಷ್ಕ ಅಂತ.



ಗುಬ್ಬಚ್ಚಿಗಳಿಗೆ ಆಗ ಕಷ್ಟದ ದಿನಗಳಾಗಿದ್ದವು. ಅವಕ್ಕೆ ತಿನ್ನಲು ಎಲ್ಲೂ ಓಟ್ಸ್

ಕಾಳುಗಳೇ ಸಿಗುತ್ತಿರಲಿಲ್ಲ. ಏಕೆಂದರೆ ಈಗ ದೊಡ್ಡ ನಗರಗಳಲ್ಲಿ ಕುದುರೆಗಳಿದ್ದುದೇ ತುಂಬ ಕಮ್ಮಿ. ಹಿಂದಿನ ದಿನಗಳಲ್ಲಾದರೆ ಜೀವನ ಎಷ್ಟು ಚೆನ್ನಾಗಿರುತ್ತಿತ್ತು. ಅದರ ಬಗೆಗೆ ಕಥೆಗಳನ್ನು ಈ ಗುಬ್ಬಚ್ಚಿಮರಿ ತನ್ನ ತಾತ ಚಿರ್ಪ್‌ನಿಂದ ಕೇಳಿ ತಿಳಿದಿದ್ದಿತಷ್ಟೆ. ಆ ದಿನಗಳಲ್ಲಿ ಗುಬ್ಬಚ್ಚಿಗಳು ಇಡೀ ದಿನ ಕುದುರೆ ಗಾಡಿ ಸ್ಟಾಂಡ್‌ಗಳ ಬಳಿ ಚಿಲಿಪಿಲಿಗುಟ್ಟುತ್ತ ಕಳೆಯುತ್ತಿದ್ದವು. ಅಲ್ಲಿ ಕುದುರೆಗಳ ಬಾಯಿಗೆ ಕಟ್ಟಿದ್ದ ಚೀಲಗಳಿಂದ ಓಟ್ಸ್ ಕಾಳುಗಳು ಬೇಕಾದಷ್ಟು ಕೆಳಕ್ಕೆ ಸುರಿಯುತ್ತಿದ್ದವು.

ಈ ದಿನಗಳಲ್ಲಾದರೋ ನಗರದಲ್ಲಿ ತುಂಬ ಕಾರುಗಳು. ಕಾರುಗಳಿಗೆ ಓಟ್ಸ್ ಯಾಕೆ ಬೇಕು? ಕುದುರೆಗಳಂತೆ ಅವಕ್ಕೆ ಆ ಕಾಳುಗಳನ್ನು ಜಗಿದು ತಿನ್ನಲು ಸಾಧ್ಯವೇ? ಕಾಳುಗಳ ಬದಲು ಈ ಕಾರುಗಳು ಗ್ಯಾಲನ್ ಗಟ್ಟಲೆ ಯಾವುದೋ ಕೆಟ್ಟ ವಾಸನೆಯ ವಿಷಮಯ ದ್ರವವನ್ನು ಕುಡಿಯುತ್ತವೆ. ಆದ್ದರಿಂದ ನಗರದಲ್ಲೀಗ ಹಿಂದಿದ್ದುದಕ್ಕಿಂತ ತುಂಬ ಕಮ್ಮಿ ಸಂಖ್ಯೆಯಲ್ಲಿ ಗುಬ್ಬಚ್ಚಿಗಳಿದ್ದವು. ಹೆಚ್ಚಿನವು ಗ್ರಾಮಾಂತರಗಳಿಗೆ ಹಾರಿ ಹೋಗಿದ್ದವು, ಕುದುರೆಗಳ ಬಳಿ ಇರಲು. ಇನ್ನು ಕೆಲವು ಕಾಳಿನ ಮೂಟೆಗಳನ್ನು ಹಡಗಿಗೆ ತುಂಬುವ ಹಡಗುಕಟ್ಟೆಗಳಿದ್ದ ನಗರಗಳಿಗೆ ಹಾರಿ ಹೋಗಿದ್ದವು. ಅಲ್ಲಿ ಗುಬ್ಬಚ್ಚಿಗಳು ಸಂತೋಷದಿಂದಿವೆ. ಅವಕ್ಕೆ ಅಲ್ಲಿ ಎಂದೂ ಹಸಿವಿನಿಂದ ನರಳಬೇಕಾಗಿಯೇ ಇಲ್ಲ.

"ಆ ಹಿಂದಿನ ಒಳ್ಳೆಯ ದಿನಗಳಲ್ಲಿ ಗುಬ್ಬಚ್ಚಿಗಳು ಯಾವಾಗಲೂ ಎರಡು ಮೂರು ಸಾವಿರ ಜೊತೆಯಾಗಿ ಹಿಂಡುಗಳಲ್ಲಿರುತ್ತಿದ್ದವು" ಎಂದು ತಾತ ಚಿರ್ಪ್ ಈ ಗುಬ್ಬಚ್ಚಿಮರಿಗೆ ಹೇಳಿತ್ತು. "ಈ ಗುಬ್ಬಚ್ಚಿಗಳ ಹಿಂಡು ಗಾಳಿಯನ್ನು ಸೀಳಿಕೊಂಡು ಬಿರ್ರನೆ ಹಾರಿಹೋದಾಗ ನೋಡಬೇಕಿತ್ತು! ಜನ ಮಾತ್ರವಲ್ಲ, ಗಾಡಿ ಕುದುರೆಗಳೂ ಭಯದಿಂದ ದಿಕ್ಕಾಪಾಲಾಗಿ ಓಡುತ್ತ ಗೊಣಗುತ್ತಿದ್ದವು: 'ಅಯ್ಯೋ, ದೇವರೇ! ನಮ್ಮನ್ನು ಕಾಪಾಡಪ್ಪ! ಈ ಹಾಳು ಗುಬ್ಬಚ್ಚಿಗಳ ಕಾಟ ತಪ್ಪಿಸಲು ಏನೂ ಮಾಡುವುದಕ್ಕಾಗುವುದಿಲ್ಲವೇ?' ಮತ್ತೆ ಆ ದಿನಗಳಲ್ಲಿ ಮಾರುಕಟ್ಟೆ ಸ್ಥಳಗಳಲ್ಲಿ ನಡೆಯುತ್ತಿದ್ದ ಗುಬ್ಬಿಗಳ ಮಹಾ ಕದನಗಳನ್ನು ನೀನು ಊಹಿಸಿಯೂ ತಿಳಿಯಲಾರೆ! ಪುಕ್ಕಗಳು ಎಲ್ಲ ದಿಕ್ಕುಗಳಲ್ಲೂ ಮೋಡಗಳಂತೆ ಹಾರಿಹೋಗುತ್ತಿದ್ದವು. ಈ ದಿನಗಳಲ್ಲಿ ಅಂತಹ ಕದನಗಳ ಸುಳಿವೇ ಇಲ್ಲ."

ಪಾಷ್ಕ ಗುಬ್ಬಚ್ಚಿ ಆಗಷ್ಟೆ ಆ ಪೆಟ್ಟಿಗೆ ಅಂಗಡಿಯ ಒಳ ಹೊಕ್ಕಿತ್ತು. ಅಲ್ಲಿದ್ದ ಏನನ್ನಾದರೂ ಕಚ್ಚಿಕೊಳ್ಳೋಣವೆಂದು ಯೋಚಿಸುತ್ತಿದ್ದಂತೆ ಮುದಿ ಕಾಗೆ ಒಳ ಬಂದು ಬಿಟ್ಟಿತು. ಅದು ತಕ್ಷಣವೇ ಪಾಷ್ಕನ ತಲೆಯ ಮೇಲೆ ಗಟ್ಟಿಯಾಗಿ ಕುಕ್ಕಿತು.

ಪಾಷ್ಕ ಉರುಳಿ ಬಿದ್ದಿತು, ಕಣ್ಣು ಮುಚ್ಚಿಕೊಂಡು ಸತ್ತಂತೆ ಸೋಗು ಹಾಕಿತು.

ಕಾಗೆ ಅದನ್ನು ಎತ್ತಿ ಹೊರಕ್ಕೆ ಎಸೆಯಿತು. ಗಟ್ಟಿಯಾಗಿ ಕೂಗಾಡುತ್ತ, ಪ್ರಪಂಚದಲ್ಲಿರುವ ಎಲ್ಲ ಕಳ್ಳ ಗುಬ್ಬಿಗಳ ಮೇಲೂ ಹಿಡಿಹಿಡಿ ಶಾಪ ಹಾಕಿತು.



ಈ ಗಲಾಟೆ ಕೇಳಿ ಪೊಲೀಸ್‌ಮನ್ ಪೆಟ್ಟಿಗೆ ಅಂಗಡಿಯ ಕಡೆಗೆ ಹೋದ. ಪಾಷ್ಕ ಮಂಜಿನ ಮೇಲೆ ಬಿದ್ದಿದ್ದಿತು. ಅದರ ತಲೆ ಸಿಡಿಯುತ್ತಿತ್ತು. ಕೊಕ್ಕನ್ನು ಮೆಲ್ಲಗೆ ತೆರೆಯುತ್ತಿತ್ತು, ಮುಚ್ಚುತ್ತಿತ್ತು.



"ಅಯ್ಯೋ ಪಾಪ, ದಿಕ್ಕಿಲ್ಲದ ಗುಬ್ಬಚ್ಚಿಮರಿ" ಎನ್ನುತ್ತ ಪೊಲೀಸ್‌ಮನ್ ತನ್ನ ಕೈಗವಸನ್ನು ಹೊರಗೆಳೆದು ಅದರಲ್ಲಿ ಪಾಷ್ಕನನ್ನಿರಿಸಿ ಅದನ್ನು ತನ್ನ ಜೇಬಿನಲ್ಲಿರಿಸಿಕೊಂಡ. "ನಿನಗೀಗ ಜೀವನ ಬಹಳ ಕಷ್ಟವಾಗಿದೆ !"

ಪಾಷ್ಕ ಆ ಮನುಷ್ಯನ ಜೇಬಿನಲ್ಲಿ ಕೈಗವಸಿನಲ್ಲಿ ಮಲಗಿ ಅತ್ತಿತು. ಏಕೆಂದರೆ ಅದಕ್ಕೆ ಗಾಯವಾಗಿತ್ತು. ಜೊತೆಗೆ ಅದಕ್ಕೆ ತುಂಬ ಹಸಿವೂ ಆಗಿತ್ತು. ತಿನ್ನುವುದಕ್ಕೆ ಏನಾದರೂ ಒಂದು ಚೂರು ಸಿಕ್ಕರೆ ಚೆನ್ನ. ಆದರೆ ಪೊಲೀಸ್‌ಮನ್‌ನ ಜೇಬಿನಲ್ಲಿ ಬ್ರೆಡ್ ತುಣುಕುಗಳೇ ಇರಲಿಲ್ಲ. ಕೆಟ್ಟ ವಾಸನೆಯ ಹೊಗೆಸೊಪ್ಪಿನ ಚೂರುಗಳು ಬಿಟ್ಟು ಅಲ್ಲಿ ಬೇರೇನೂ ಇರಲಿಲ್ಲ.

ಮಾರನೆಯ ದಿನ ಪೆತ್ರೋವ್ನ ಮಾಷಳನ್ನು ಆಡಲು ಪಾರ್ಕಿಗೆ ಕರೆದೊಯ್ದಾಗ ಪೊಲೀಸ್‌ಮನ್ ಅವರ ಬಳಿಗೆ ಬಂದ.

"ಮಗು, ನಿನಗೆ ಗುಬ್ಬಚ್ಚಿಮರಿ ಬೇಕಾ, ಮನೆಯಲ್ಲಿ ಸಾಕಿಕೊಳ್ಳೋಕೆ?" ಎಂದವನು ಮಾಷಳನ್ನು ಕೇಳಿದ.

"ಹೌದು, ಬೇಕು. ತುಂಬ ಬೇಕು" ಅಂದಳು ಮಾಷ. ಆಗ ಆ ವ್ಯಕ್ತಿಯ ಕೆಂಪಾದ, ಹವೆಯ ಹೊಡೆತಕ್ಕೆ ಸಿಕ್ಕಿ ಗಡುಸಾಗಿದ್ದ ಮುಖದ ತುಂಬ ನಿರಿಗೆಗಳು ಮೂಡಿದವು. ಅವನು ನಕ್ಕು ಜೇಬಿನಿಂದ ತನ್ನ ಕೈಗವಸನ್ನು ಹೊರತೆಗೆದನು. ಆ ಕೈಗವಸಿನ ಒಳಗೆ ಪಾಷ್ಕ ಇದ್ದಿತು.

"ತಗೋ. ಇದು ಈ ಕೈಗವಸಿನಲ್ಲೇ ಇರಲಿ. ಇಲ್ಲದಿದ್ದರೆ ಈ ಚಳಿಗೆ ಜಡ್ಡು ಕಟ್ಟುತ್ತೆ. ಕೈಗವಸನ್ನು ಆಮೇಲೆ ಹಿಂದಿರುಗಿಸುವಿಯಂತೆ. ನಾನು ಇಲ್ಲೇ ಮಧ್ಯಾಹ್ನದವರೆಗೂ ಇರುತ್ತೇನೆ" ಅವನೆಂದ.

ಮಾಷ ಪಾಷ್ಕನನ್ನು ತನ್ನ ಮನೆಗೆ ಕರೆದೊಯ್ದಳು. ಬ್ರಷ್‌ನಿಂದ ಅದರ ಕೆದರಿದ್ದ ಪುಕ್ಕಗಳನ್ನು ನಯಗೊಳಿಸಿದಳು. ಅದಕ್ಕೆ ಆಹಾರ ಕೊಟ್ಟು ಕೋಣೆಯಲ್ಲೇ ಹಾರಲು ಬಿಟ್ಟಳು. ಪಾಷ್ಕ ಒಂದು ಸಾಸರ್‌ನ ಅಂಚಿನ ಮೇಲೆ ಕುಳಿತು ಕೆಲವು ತೊಟ್ಟು ಟೀ ಹೀರಿತು. ಆಮೇಲೆ ಗಡಿಯಾರದಲ್ಲಿದ್ದ ಕಮ್ಮಾರನ ಬಳಿಗೆ ಹಾರಿಹೋಗಿ ಅವನ ತಲೆಯ ಮೇಲೆ ಕುಳಿತಿತು. ಅಲ್ಲಿ ಕುಳಿತೇ ನಿದ್ರೆಹೋಗ ತೊಡಗಿತ್ತು, ಆಗ ಕಮ್ಮಾರನಿಗೆ ಕೋಪ ಬಂದು ತನ್ನ ಕೈಲಿದ್ದ ಬಡಿಗೆಯನ್ನು ಬೀಸಿದ. ಅವನು ಪಾಷ್ಕನನ್ನು ಹೊಡೆಯ ಹೊರಟಿದ್ದನೆಂದೇ ಕಂಡುಬಂದಿತು. ಪಾಷ್ಕ ತಕ್ಷಣವೇ ಹಾರಿ ಮತ್ತೊಂದು ಕಂಚಿನ ತಲೆಯ ಮೇಲೆ ಹೋಗಿ ಕುಳಿತಿತು. ಅದು ಇವಾನ್ ಕ್ರಿಲೋವ್ ಎಂಬಾತನ ತಲೆಯಾಗಿತ್ತು. ಅವನು ಮಕ್ಕಳಿಗಾಗಿ ಅನೇಕ ತುಂಬ ಸೊಗಸಾದ ನೀತಿಕಥೆಗಳನ್ನು ಬರೆದಿದ್ದ. ಅವನ ತಲೆ ತುಂಬ ಜಾರುವಂತಿತ್ತು. ಅದರ ಮೇಲೆ ಕುಳಿತುಕೊಳ್ಳುವುದೇ ಕಷ್ಟವಾಯಿತು ಪಾಷ್ಕನಿಗೆ. ಈ ಮಧ್ಯೆ ಕೋಪಗೊಂಡಿದ್ದ ಕಮ್ಮಾರ ತನ್ನ ಬಡಿಗಲ್ಲಿನ ಮೇಲೆ ಬಡಿಯ ತೊಡಗಿದ್ದ. ಒಟ್ಟು ಹನ್ನೊಂದು ಬಾರಿ ಬಡಿದ.

ಪಾಷ್ಕ ಮಾಷಳ ಕೋಣೆಯಲ್ಲಿ ಒಂದು ಹಗಲು, ಒಂದು ರಾತ್ರಿ ಕಳೆಯಿತು. ಮುದಿ ಕಾಗೆಯು ಮೇಲಿನ ಪುಟ್ಟ ಕಿಟಕಿಯ ಮೂಲಕ ತೂರಿಕೊಂಡು ಬಂದು



ಮೇಜಿನ ಮೇಲೆ ತಟ್ಟೆಯಲ್ಲಿ ಇರಿಸಲಾಗಿದ್ದ ಸೇಬಿನ ಹಣ್ಣಿನ ಚೂರೊಂದನ್ನು ಕಚ್ಚಿಕೊಂಡು ಹೋದುದನ್ನು ಅದು ಕಂಡಿತು. ಕಾಗೆ ಒಳ ಬಂದಾಗ ಪಾಷ್ಕ ಕೆಂಪು ಹೂಗಳ ಬುಟ್ಟಿಯ ಹಿಂದೆ ಅಡಗಿ ನಿಶ್ಚಲವಾಗಿ ಕುಳಿತು ಎಲ್ಲವನ್ನೂ ಕಂಡಿತು.

ಆಮೇಲೆ ಪಾಷ್ಕ ಪ್ರತಿದಿನವೂ ಮಾಷಳ ಬಳಿಗೆ ಬರ ತೊಡಗಿತು. ಅದು ಮಾಷ ಕೊಟ್ಟ ಬ್ರೆಡ್ಡಿನ ತುಣುಕುಗಳನ್ನು ತಿನ್ನುತ್ತಿದ್ದಿತು. ಅವಳ ಈ ಕರುಣೆಗೆ ಪ್ರತಿಯಾಗಿ ತಾನು ಅವಳಿಗೆ ಯಾವ ರೀತಿಯಲ್ಲಿ ಸಹಾಯವಾಗಬಹುದು, ಎಂದು ಅದು ಯೋಚಿಸ ಯತ್ನಿಸಿತು. ಒಂದು ದಿನ ಅದು ಅವಳಿಗೆ ಒಂದು ಹೆಪ್ಪುಗಟ್ಟಿದ ಚೂಪು ಮೂತಿಯ ಕಂಬಳಿಹುಳುವನ್ನು ತಂದು ಕೊಟ್ಟಿತು. ಅದು ಅದನ್ನು ಪಾರ್ಕಿನಲ್ಲಿ ಒಂದು ಮರದ ಮೇಲೆ ಕಂಡಿದ್ದಿತು. ಆದರೆ ಮಾಷ ಕಂಬಳಿ ಹುಳುವನ್ನು ತಿನ್ನಲಿಲ್ಲ. ಪೆತ್ರೋವ್ನಳಿಗಂತೂ ಅದನ್ನು ಕಂಡು ತುಂಬ ಕೋಪವೇ ಬಂದುಬಿಟ್ಟಿತು. ಅವಳು ಕಂಬಳಿಹುಳುವನ್ನು ಕಿಟಕಿಯಿಂದ ಆಚೆಗೆ ಎಸೆದು ಬಿಟ್ಟಳು.

ಆಮೇಲೆ ಮುದಿ ಕಾಗೆಯ ಮೇಲೆ ಸೇಡು ತೀರಿಸಿಕೊಳ್ಳಲು ಪಾಷ್ಕ ಆ ಕಾಗೆ ಕದ್ದು ಸಂದುಗಳಲ್ಲಿ ಅಡಗಿಸಿಟ್ಟಿದ್ದ ವಸ್ತುಗಳನ್ನೆಲ್ಲ ಕಿತ್ತು ಹೊರಹಾಕ ತೊಡಗಿತು. ಅದು ಅವನ್ನೆಲ್ಲ ಮಾಷಳಿಗೇ ಹಿಂದಿರುಗಿಸಲು ನಿರ್ಧರಿಸಿತು. ಒಂದು ದಿನ ಪಾಷ್ಕ ಅವಳಿಗೆ ಒಂದು ಒಣಗಿದ ಮಿಠಾಯಿಯನ್ನು ತಂದು ಕೊಟ್ಟಿತು. ಇನ್ನೊಂದು ದಿನ ಒಣಗಿದ ಕಡುಬಿನ ಚೂರು ತಂದು ಕೊಟ್ಟಿತು. ಮತ್ತೊಂದು ದಿನ ಕೆಂಪು ಮಿಠಾಯಿ ಸುತ್ತುವ ಕಾಗದವನ್ನು ತಂದು ಕೊಟ್ಟಿತು.

ಕಾಗೆ ಇತರರ ಮನೆಗಳಿಂದಲೂ ಕದಿಯುತ್ತಿದ್ದಿತು. ಏಕೆಂದರೆ ಕೆಲವು ವೇಳೆ ಪಾಷ್ಕ ತಪ್ಪು ಮಾಡಿ ಮಾಷಳಿಗೆ ಅವಳಿಗೆ ಸೇರಿರದಿದ್ದಂಥ ವಸ್ತುಗಳನ್ನೂ ತಂದು ಕೊಡುತ್ತಿದ್ದಿತು. ಒಮ್ಮೆ ಅದು ಅವಳಿಗೆ ಚಿಕ್ಕ ಬಾಚಣಿಗೆಯೊಂದರ ತುಂಡನ್ನು ತಂದು ಕೊಟ್ಟಿತು. ಆಮೇಲೆ ಇಸ್ಪೀಟು ಆಟದ ಒಂದು ಎಲೆಯನ್ನೂ ತಂದು ಕೊಟ್ಟಿತು (ಅದು ಕಳಾವರ್ ರಾಣಿ ಎಲೆಯಾಗಿತ್ತು). ಇನ್ನೊಂದು ದಿನ ಫೌಂಟನ್ ಪೆನ್ ಒಂದರ ಚಿನ್ನದ ನಿಬ್ಬಿನ ತುದಿಯನ್ನು ತಂದು ಕೊಟ್ಟಿತು.

ಪಾಷ್ಕ ತಾನು ಕಚ್ಚಿ ತಂದ ವಸ್ತುಗಳನ್ನು ಮಾಷಳ ಕೋಣೆಯಲ್ಲಿ ನೆಲದ ಮೇಲೆ ಎಸೆದು, ಕೋಣೆಯಲ್ಲೇ ಕೆಲವು ಸುತ್ತು ಹಾಕಿ, ಆಮೇಲೆ ಮತ್ತೆ ಕಿಟಕಿಯ ಮೂಲಕ ಹೊರಕ್ಕೆ ಒಂದು ಪುಟ್ಟ ತುಪ್ಪುಳದ ಫಿರಂಗಿ ಗುಂಡಿನಂತೆ ಹಾರಿ ಹೋಗುತ್ತಿತ್ತು.

ಈ ಸಂಜೆ ಪೆತ್ರೋವ್ನ ಯಾಕೋ ಏನೋ ತುಂಬ ಹೊತ್ತು ಎಚ್ಚರಗೊಳ್ಳಲೇ ಇಲ್ಲ. ಮೇಲಿನ ಪುಟ್ಟ ಕಿಟಕಿಯ ಮೂಲಕ ಕಾಗೆ ಹೇಗೆ ತೂರಿಕೊಂಡು ಬರುತ್ತೆ ಅನ್ನುವುದನ್ನು ಕಾಣುವ ಆಸೆಯಾಯಿತು ಮಾಷಳಿಗೆ. ಏಕೆಂದರೆ ಅವಳು ಅದನ್ನು ಎಂದೂ ನೋಡಿಯೇ ಇರಲಿಲ್ಲ.

ಆದ್ದರಿಂದ ಮಾಷ ಕುರ್ಚಿ ಹತ್ತಿ ಆ ಪುಟ್ಟ ಕಿಟಕಿ ತೆರೆದು ಬಟ್ಟೆ ಬೀರುವಿನ ಹಿಂದೆ ಅಡಗಿ ನಿಂತಳು. ಮೊದಲು ದೊಡ್ಡದೊಡ್ಡ ಮಂಜಿನ ಚಕ್ಕೆಗಳು ಕೋಣೆ

ಯೊಳಕ್ಕೆ ತೂರಿಕೊಂಡು ಬಂದವು. ನೆಲದ ಮೇಲೆ ಬಿದ್ದು ಅವು ಕರಗಿದವು. ಆಮೇಲೆ ಏನೋ ಕೆರೆದ ಶಬ್ದ ಕೇಳಿ ಬಂದಿತು. ಕಾಗೆ ಪುಟ್ಟ ಕಿಟಕಿ ಮೂಲಕ ತೂರಿಕೊಂಡು ಕೋಣೆಯೊಳಕ್ಕೆ ಬಂದಿತು. ಅಮ್ಮನ ಡ್ರೆಸಿಂಗ್ ಟೇಬಲ್ ಮೇಲಕ್ಕೆ ಕುಪ್ಪಳಿಸಿಕೊಂಡು ಹೋಗಿ ಕುಳಿತಿತು. ಕನ್ನಡಿ ನೋಡಿತು. ಅಲ್ಲಿ ತನ್ನಂಥದೇ ಮತ್ತೊಂದು ಕೋಪಿಷ್ಠ ಮುದಿ ಕಾಗೆ ಇದ್ದುದನ್ನು ಕಂಡಿತು. ಕೋಪ ಬಂದು ತನ್ನ ಪುಕ್ಕಗಳನ್ನು ಕೆದರಿಕೊಂಡಿತು. ಆಮೇಲೆ 'ಕಾ, ಕಾ' ಎಂದು ಕೂಗಿ ಮೇಜಿನ ಮೇಲಿದ್ದ ಪುಟ್ಟ ಗಾಜಿನ ತುರಾಯಿಯನ್ನು ಕಳ್ಳತನದಿಂದ ಎತ್ತಿಕೊಂಡು ಕಿಟಕಿ ಮೂಲಕ ಹೊರಕ್ಕೆ ಹಾರಿ ಹೋಯಿತು.



ಮಾಷ ತಕ್ಷಣವೇ ಕೂಗಿಕೊಂಡಳು. ಪೆತ್ರೋವ್ನಳಿಗೆ ಎಚ್ಚರವಾಯಿತು. ಅವಳು ಬಯ್ಯ ತೊಡಗಿದಳು, ಗೋಳಿಟ್ಟಳು. ಅಮ್ಮ ರಂಗಮಂದಿರದಿಂದ ಹಿಂದಿರುಗಿ ಈ ದುರ್ಘಟನೆಯ ಬಗೆಗೆ ತಿಳಿದಾಗ ಗಟ್ಟಿಯಾಗಿ ಅಳ ತೊಡಗಿದಳು. ಮಾಷಳಿಗೂ ಅಳು ಬಂದಿತು. ಪೆತ್ರೋವ್ನ ಅಮ್ಮನನ್ನು ಸಮಾಧಾನ ಪಡಿಸಲು ಯತ್ನಿಸಿದಳು. ಆ ಮೂರ್ಖ ಮುದಿ ಕಾಗೆ ಗಾಜಿನ ತುರಾಯಿಯನ್ನು ಮಂಜಿನಲ್ಲಿ ಎಲ್ಲಾದರೂ ಬೀಳಿಸದೆ ಇದ್ದರೆ ಅದನ್ನು ಕಂಡುಹಿಡಿಯುವುದು ಸಾಧ್ಯವಿದೆ, ಎಂದು ಅವಳು ಅಮ್ಮನಿಗೆ ಹೇಳಿದಳು.

ಮಾರನೆಯ ಬೆಳಿಗ್ಗೆ ಪಾಷ್ಕ ಎಂದಿನಂತೆ ಮಾಷಳ ಮನೆಗೆ ಭೇಟಿ ಕೊಡಲು ಬಂದಿತು. ಕ್ರಿಲೋವ್ ಕಂಚಿನ ತಲೆಯ ಮೇಲೆ ಕುಳಿತು ಅದು ಗಾಜಿನ ತುರಾಯಿ ಕಳವಾದ ದುಃಖದ ವಾರ್ತೆಯನ್ನು ಕೇಳಿತು. ತನ್ನ ಪುಕ್ಕಗಳನ್ನು ಕೊಕ್ಕಿನಿಂದ ಕೆದಕಿಕೊಂಡು ಯೋಚನೆ ಮಾಡ ತೊಡಗಿತು. ಆಮೇಲೆ ಮಾಷಳ ತಾಯಿ ರಿಹರ್ಸಲ್‌ಗೆ ಹೋದಾಗ ಅದೂ ಅವಳ ಹಿಂದೆ ಹೊರಟಿತು.

ಅದು ರಂಗಮಂದಿರ ತಲುಪುವವರೆಗೂ ಹೆಸರು ಕಂಬಗಳ ಮೇಲಿನಿಂದ ದೀಪದ ಕಂಬಗಳ ಮೇಲಕ್ಕೆ, ದೀಪದ ಕಂಬಗಳ ಮೇಲಿನಿಂದ ಮರಗಳ ಮೇಲಕ್ಕೆ ಹಾರುತ್ತ ಹೋಯಿತು. ಅಲ್ಲಿ ಅದು ರಂಗಮಂದಿರದ ಚಾವಣಿಯ ಮೇಲಿದ್ದ ಎರಕದ ಕಬ್ಬಿಣದ ಕುದುರೆಗಳಲ್ಲೊಂದರ ತಲೆಯ ಮೇಲೆ ಕುಳಿತಿತು, ತನ್ನ ಕೊಕ್ಕನ್ನು ಶುಭ್ರಪಡಿಸಿಕೊಂಡಿತು, ಕಣ್ಣಿನ ಬಳಿ ಮೂಡಿದ್ದ ಒಂದು ಹನಿ ಕಣ್ಣೀರನ್ನು ತನ್ನ ಪಾದದಿಂದ ಒರಸಿಕೊಂಡಿತು, ಚಿಲಿಪಿಲಿಗುಟ್ಟಿತು, ಆಮೇಲೆ ಹಾರಿ ಹೋಯಿತು...

ಅಂದು ಸಂಜೆ ಮಾಷಳ ಅಮ್ಮ ಮಾಷಳಿಗೆ ಲಂಗದ ಮೇಲೆ ಕಸೂತಿ ಅಂಚಿನ ಬಿಳಿ ಮೇಲುಡುಪು ತೊಡುವಂತೆ ಹೇಳಿದಳು. ಪೆತ್ರೋವ್ನಳೂ ತನ್ನ ಸೊಗಸಾದ ಸಿಲ್ಕ್ ಶಾಲು ಹೊದ್ದುಕೊಂಡಳು. ಮೂವರೂ ರಂಗಮಂದಿರಕ್ಕೆ ಹೋದರು.

ಆಗಲೇ ಪಾಷ್ಕ ಅದರ ತಾತ ಚಿರ್ಪ್ ಹೇಳಿದ್ದಂತೆ ಅಕ್ಕಪಕ್ಕದ ಪ್ರದೇಶಗಳ ಗುಬ್ಬಚ್ಚಿಗಳನ್ನೆಲ್ಲ ಸಭೆ ಸೇರಿಸಿತು. ಅವು ಸಮಾಲೋಚನೆ ನಡೆಸಿ, ಮುದಿ ಕಾಗೆ ಗಾಜಿನ ತುರಾಯಿಯನ್ನು ಬಚ್ಚಿಟ್ಟಿದ್ದ ಐಸ್‌ಕ್ರೀಂ ಪೆಟ್ಟಿಗೆ ಅಂಗಡಿಯ ಮೇಲೆ ದಾಳಿ ಮಾಡಬೇಕೆಂದು ನಿರ್ಧರಿಸಿದವು.



ಮೊದಲು ಈ ಗುಬ್ಬಚ್ಚಿಗಳು ಹತ್ತಿರದ ಮರಗಳ ಮೇಲೆ ಹೋಗಿ ಕುಳಿತು ಕಾಗೆಯನ್ನು ಮೂದಲಿಸ ತೊಡಗಿದವು. ಕಾಗೆ ಕೋಪಗೊಂಡು ತಮ್ಮ ಬಳಿಗೆ ಹಾರಿ ಹೊರ ಬರುವುದೆಂದು ಅವು ಆಶಿಸಿದ್ದವು. ಆಗ ಅವೆಲ್ಲ ಅದರ ಮೇಲೆ ಎಲ್ಲ ಕಡೆಗಳಿಂದಲೂ ಎರಗಿ ಪ್ರಹಾರ ನೀಡಬಹುದಿತ್ತು. ಅಂಗಡಿಯ ಒಳಗಾದರೆ ಕಾದಾಟಕ್ಕೆ ಸ್ಥಳ ಸಾಲುವುದಿಲ್ಲ, ಹೊರಗಾದರೆ ಸ್ಥಳ ವಿಶಾಲವಾಗಿರುತ್ತೆ, ಅನ್ನು ವುದು ಅವುಗಳ ಹಂಚಿಕೆ. ಆದರೆ ಅದು ತುಂಬ ಅನುಭವಸ್ಥ ಕಾಗೆ, ಬುದ್ಧಿವಂತ ಕಾಗೆ. ಅದು ಗುಬ್ಬಚ್ಚಿಗಳ ಹಂಚಿಕೆಗಳನ್ನು ಊಹಿಸಿ ತಿಳಿದು ಪೆಟ್ಟಿಗೆ ಅಂಗಡಿ ಬಿಟ್ಟು ಹೊರ ಬರಲೇ ಇಲ್ಲ.

ಕೊನೆಗೆ ಗುಬ್ಬಚ್ಚಿಗಳು ಧೈರ್ಯ ಮಾಡಿ ಆ ಅಂಗಡಿಯೊಳಕ್ಕೇ ಒಂದಾದ ಮೇಲೊಂದರಂತೆ ಹೋಗಿ ಮುತ್ತಿಗೆ ಹಾಕಿದವು. ಇವುಗಳ ಗದ್ದಲಗಲಭೆ ಎಷ್ಟು ಹೆಚ್ಚಾಯಿತೆಂದರೆ ಅದನ್ನು ನೋಡಲು ಹೊರಗಡೆ ಜನರ ಒಂದು ದೊಡ್ಡ ಗುಂಪೇ ನೆರೆಯಿತು.

ಅದನ್ನು ಕಂಡು ಪೊಲೀಸ್‌ಮನ್ ಓಡೋಡಿ ಬಂದ. ಐಸ್‌ಕ್ರೀಂ ಪೆಟ್ಟಿಗೆ ಅಂಗಡಿ ಯೊಳಗೆ ಇಣಿಕಿ ನೋಡಿದ. ಅವನಿಗೆ ಕಂಡುದೆಲ್ಲ ಮೋಡದಂತೆ ಹರಡಿದ್ದ ಗುಬ್ಬಚ್ಚಿ ಗಳ ಪುಕ್ಕಗಳು. "ಓಹೋ, ಇಲ್ಲಿ ಭಾರಿ ಕಾಳಗವೇ ನಡೆದಿದೆ" ಎಂದು ಅವನು ಪೆಟ್ಟಿಗೆ ಅಂಗಡಿ ಬಾಗಿಲಿಗೆ ಅಡ್ಡವಾಗಿ ಹೊಡೆದಿದ್ದ ಮರದ ಪಟ್ಟಿಗಳನ್ನು ಕಿತ್ತು ಹಾಕ ತೊಡಗಿದ. ಅವನು ಆ ಹೋರಾಟವನ್ನು ನಿಲ್ಲಿಸ ಬಯಸಿದ್ದ.

ಅದೇ ಸಮಯದಲ್ಲಿ ರಂಗಮಂದಿರದಲ್ಲಿ ವಾದ್ಯಗೋಷ್ಠಿಯ ಕುಳಿ ಪ್ರದೇಶ ದಲ್ಲಿ ಪಿಟೀಲುಗಾರರೂ ಸೆಲ್ಲೋ ವಾದಕರೂ ವಾದನ ಪ್ರಾರಂಭಿಸಲು ತಮ್ಮ ಕಮಾನುಗಳನ್ನು ಮೇಲೆ ಎತ್ತಿದ್ದರು. ಸಂಗೀತ ನಿರ್ವಾಹಕ ತನ್ನ ನಿಸ್ತೇಜವಾದ ಕೈಯನ್ನು ಮೇಲೆತ್ತಿ ಅದನ್ನು ನಿಧಾನವಾಗಿ ಚಲಿಸಿದ. ಸಂಗೀತದ ಇಂಪಾದ ಧ್ವನಿ ಏರುತ್ತಿದ್ದಂತೆ ರಂಗಮಂಚದ ಮೇಲೆ ಭಾರವಾದ ವೆಲ್ವೆಟ್ ತೆರೆಯಲ್ಲಿ ಕಿರುತರಂಗ ಗಳು ಹರಿದವು. ತೆರೆ ಇಬ್ಭಾಗವಾಗಿ ಎರಡೂ ಕಡೆಗೆ ಸರಿಯಿತು.

ರಂಗಮಂಚದ ಮೇಲೆ ಮಾಷ ಒಂದು ದೊಡ್ಡ, ಬೆಳಕಿನಿಂದ ತುಂಬಿದ ಕೋಣೆ ಯನ್ನು ಕಂಡಳು. ಅದರಲ್ಲಿ ಇಬ್ಬರು ಕುರೂಪಿಗಳಾದ, ವೈಭವದ ಉಡುಗೆ ತೊಟ್ಟಿದ್ದ ಮಲಸೋದರಿಯರು ಮತ್ತು ಕೇಡಿಗ ಮಲತಾಯಿ ಇದ್ದರು. ಇವರ ಲ್ಲದೆ ಅಲ್ಲಿ ಮಾಷಳ ತಾಯಿಯೂ ಇದ್ದಳು. ಅವಳು ತೆಳುವಾಗಿ ಚೆಲುವಾಗಿದ್ದಳು, ಆದರೆ ಹರಕಲು ಬಟ್ಟೆ ತೊಟ್ಟಿದ್ದಳು.

"ಸಿಂಡರೆಲಾ !" ಮಾಷ ಮೆಲ್ಲಗೆ ಉಸುರಿದಳು. ರಂಗಮಂಚದ ಮೇಲೆ ನೆಟ್ಟಿದ್ದ ತನ್ನ ಕಣ್ಣುಗಳನ್ನು ಅವಳು ಕೀಳದಾಗಿದ್ದಳು.

ಮುಂದಿನ ದೃಶ್ಯದಲ್ಲಿ ಅರಮನೆ ಕಂಡುಬಂದಿತು. ಅದರ ನೀಲಿ, ಪಾಟಲ ಹಾಗೂ ಹೊಂಬಣ್ಣಗಳು ಬೆಳುದಿಂಗಳಿನೊಂದಿಗೆ ಮಧುರವಾಗಿ ಮಿಳನವಾಗಿ ದ್ದವು. ಮಧ್ಯ ರಾತ್ರಿಯಾದಂತೆ ಸಿಂಡರೆಲಾ (ಮಾಷಳ ಅಮ್ಮ) ತನ್ನ ಮನೆಗೆ ಧಾವಿಸಿ ಹೋಗುತ್ತ ತನ್ನ ಪುಟ್ಟ ಗಾಜಿನ ಪಾದರಕ್ಷೆಯೊಂದನ್ನು ಅರಮನೆಯಲ್ಲೇ ಬಿಟ್ಟು ಬಿಟ್ಟಳು.

ಮಾಷಳ ಅಮ್ಮ ದುಃಖದಲ್ಲಿದ್ದಾಗ ಅಥವಾ ಆನಂದಿಸುತ್ತಿದ್ದಾಗ ವಾದ್ಯ ಗೋಷ್ಠಿಯೂ ದುಃಖದ ಇಲ್ಲವೇ ಗೆಲುವಿನ ಧ್ವನಿಗಳನ್ನು ನುಡಿಸುತ್ತಿದ್ದುದನ್ನು ಕೇಳುವುದು ತುಂಬ ಹಿತಕರವಾಗಿತ್ತು. ವಾದ್ಯಗೋಷ್ಠಿಯಲ್ಲಿದ್ದ ಎಲ್ಲ ಪಿಟೀಲು ಗಳೂ ಪಿಳ್ಳಂಗೋವಿಗಳೂ ಕೊಳಲುಗಳೂ ಹಾಗೂ ತುತೂರಿಗಳೂ ವಾತ್ಸಲ್ಯ ಮಯವಾದ, ಕರುಣಾಳುವಾದ ಜೀವಂತವಾದ ಪ್ರಾಣಿಗಳಾಗಿದ್ದವೋ ಅನ್ನುವಂತೆ ಕಾಣುತ್ತಿದ್ದವು. ಅವೆಲ್ಲವೂ ಮತ್ತು ಸಂಗೀತ ನಿರ್ವಾಹಕನೂ ಮಾಷಳ ಅಮ್ಮನಿಗೆ ಸಹಾಯ ಮಾಡಲು ಯತ್ನಿಸುತ್ತಿದ್ದಂತೆ ಕಂಡುಬರುತ್ತಿತ್ತು. ಸಂಗೀತ ನಿರ್ವಾಹಕ ನಂತೂ ಎಷ್ಟು ಕಷ್ಟಪಟ್ಟು ಯತ್ನಿಸುತ್ತಿದ್ದನೆಂದರೆ ಪ್ರೇಕ್ಷಕರನ್ನು ನೋಡಲೂ ಅವನು ಒಮ್ಮೆಯೂ ತಿರುಗಿ ಕೂಡ ನೋಡಲಿಲ್ಲ. ಅದು ನಿಜಕ್ಕೂ ಶೋಚನೀಯ ವಾಗಿದ್ದಿತು. ಏಕೆಂದರೆ ಪ್ರೇಕ್ಷಕರ ಮಧ್ಯೆ ಕಂಗೊಳಿಸುವ ಕಣ್ಣುಗಳ, ಕೆಂಪು ಕೆನ್ನೆಗಳ ಎಷ್ಟೊಂದು ಮಂದಿ ಮಕ್ಕಳಿದ್ದರು.



ಪ್ರೇಕ್ಷಕರಿಗೆ ತಮ್ಮತಮ್ಮ ಸ್ಥಳಗಳನ್ನು ಕಂಡುಕೊಳ್ಳಲು ಸಹಾಯ ಮಾಡು ತ್ತಿದ್ದ, ಕೈಗಳಲ್ಲಿ ಕಾರ್ಯಕ್ರಮಗಳ ಹಾಳೆಗಳನ್ನೂ ಇಕ್ಕಣ್ಣಿನ ದುರ್ಬೀನುಗಳನ್ನೂ ಇಟ್ಟುಕೊಂಡು ಸಡಗರದಿಂದ ಓಡಾಡುತ್ತಿದ್ದ, ರಂಗಮಂದಿರದ ಪ್ರತೀಹಾರಿಗಳೂ ಈಗ ಸದ್ದಿಲ್ಲದೆ ತುದಿಗಾಲಿನಲ್ಲಿ ಒಳ ಬಂದು ಬಾಗಿಲುಗಳನ್ನು ಮುಚ್ಚಿ, ಮಾಷಳ ತಾಯಿಯ ನರ್ತನವನ್ನೇ ನೋಡುತ್ತ ನಿಂತುಬಿಟ್ಟಿದ್ದರು. ಅವರಲ್ಲೊಬ್ಬ ತನ್ನ ಕಣ್ಣುಗಳಲ್ಲಿ ತುಂಬಿ ಬಂದ ನೀರನ್ನು ಮೆಲ್ಲಗೆ ಒತ್ತಿ ಒರಸಿಕೊಂಡ. ಅದರಲ್ಲಿ ಆಶ್ಚರ್ಯವೇನಿರಲಿಲ್ಲ, ಏಕೆಂದರೆ, ಮಾಷಳ ತಾಯಿ ಅವನಂತೆಯೇ ಪ್ರತೀಹಾರಿ ಯಾಗಿ ಕೆಲಸ ಮಾಡುತ್ತಿದ್ದ ಅವನ ಗತಿಸಿದ ಮಿತ್ರನ ಮಗಳೇ ಆಗಿದ್ದಳು. ಅವಳು ಎಷ್ಟು ಚೆನ್ನಾಗಿ ನರ್ತಿಸುತ್ತಿದ್ದಳು !

ಕೊನೆಗೆ ಬ್ಯಾಲೇ ಮುಗಿಯ ಬಂದಿತು. ಸಂಗೀತ ಆನಂದದ ಪರಾಕಾಷ್ಠೆಯ ತಾರಕ ಸ್ವರ ನುಡಿಸ ತೊಡಗಿತು. ಎಲ್ಲರ ಮುಖಗಳ ಮೇಲೂ ಮುಗುಳು ನಗೆ ಮೂಡಿದ್ದಿತು. ಆದರೆ ಸಿಂಡರೆಲಾಳ ಕಣ್ಣುಗಳಲ್ಲಷ್ಟೆ ಕಂಬನಿ ಇದ್ದಿತು. ಅದು ಯಾಕೋ ಎಂದು ಅನೇಕರು ಆಶ್ಚರ್ಯ ಪಡುತ್ತಿದ್ದರು. ಆ ವೇಳೆಗೆ ಸರಿಯಾಗಿ ಒಂದು ಪುಟ್ಟ ಕೆದರಿದ ಪುಕ್ಕದ ಗುಬ್ಬಚ್ಚಿ ರಂಗಮಂಚದ ಮೇಲಕ್ಕೆ ಹಾರಿ ಬಂದಿತು. ಅದು ರಂಗಮಂದಿರದ ಮಹಡಿಮೆಟ್ಟಲುಗಳ ಮೇಲೂ ಪ್ರಾಕಾರಗಳಲ್ಲೂ ಒಂದು ಸಲ ದಾರಿ ತಪ್ಪಿ, ಅತ್ತಿತ್ತ ಹಾರಿಕೊಂಡು ಕೊನೆಗೆ ಸರಿಯಾದ ದಾರಿ ಕಂಡುಕೊಂಡು ವೇಗವಾಗಿ ಅಲ್ಲಿಗೆ ಹಾರಿ ಬಂದಿದ್ದಿತು. ಅದು ಯಾವುದೋ ಭಯಂಕರ ಕಾಳಗ ಮುಗಿಸಿಕೊಂಡು ಬಂದಿದ್ದಿತೆಂಬುದು ಎಲ್ಲರಿಗೂ ಕಂಡುಬರುತ್ತಿತ್ತು.

ಗುಬ್ಬಚ್ಚಿ ರಂಗಮಂಚದ ಮೇಲೆ ಸುತ್ತು ಹಾಕಿತು. ಅದು ಕೊಕ್ಕಿನಲ್ಲಿ ಏನನ್ನೋ ಹಿಡಿದಿದ್ದಿತು. ಆ ವಸ್ತು ಥಳಥಳಿಸುತ್ತಿದ್ದಿತು, ಸ್ಫಟಿಕದ ಹರಳಿನ ರೆಂಬೆ ಯಂತಿತ್ತು.

ಪ್ರೇಕ್ಷಕರ ಮಧ್ಯೆ ಮರ್ಮರ ಧ್ವನಿ ಕೇಳಿ ಬಂದಿತು. ಸಂಗೀತ ನಿರ್ವಾಹಕ ತನ್ನ ಕೈಯನ್ನು ಮೇಲೆತ್ತಿ ಸಂಗೀತ ನಿಲ್ಲಿಸಿದ. ರಂಗಮಂಚದಲ್ಲಿ ಏನಿದೆಲ್ಲ ಎಂದು

ನೋಡಲು ಹಿಂದಿನ ಸಾಲುಗಳಲ್ಲಿ ಕುಳಿತಿದ್ದ ಪ್ರೇಕ್ಷಕರು ಎದ್ದು ನಿಂತರು. ಗುಬ್ಬಚ್ಚಿ ಸಿಂಡರೆಲಾ ಬಳಿಗೆ ಹಾರಿ ಹೋಯಿತು. ಅವಳು ತನ್ನ ಕೈಗಳನ್ನು ಮುಂದಕ್ಕೆ ಚಾಚಿದಳು. ಗುಬ್ಬಚ್ಚಿ ಅವಳ ಕೈಗಳೊಳಕ್ಕೆ ಒಂದು ಪುಟ್ಟ ಗಾಜಿನ ತುರಾಯಿಯನ್ನು ಕೆಡವಿತು. ಸಿಂಡರೆಲಾ ನಡುಗುವ ಬೆರಳುಗಳಿಂದ ಆ ತುರಾಯಿಯನ್ನು ತನ್ನ ಫ್ರಾಕಿಗೆ ಸಿಕ್ಕಿಸಿಕೊಂಡಳು.

ಸಂಗೀತ ನಿರ್ವಾಹಕ ತನ್ನ ದಂಡವನ್ನು ಮೇಲೆತ್ತಿದ. ಮತ್ತೆ ಸಂಗೀತ ಮೊಳಗ ತೊಡಗಿತು. ಪ್ರೇಕ್ಷಕರು ಕಿವಿಗಡಚುವಂತೆ ಕರತಾಡನ ಮಾಡಿದರು. ಆ ಶಬ್ದಕ್ಕೆ ದೀಪಗಳು ಅದುರ ತೊಡಗಿದವು. ಗುಬ್ಬಚ್ಚಿ ಒಳಮಾಳಿಗೆಗೆ ಹಾರಿ ಹೋಗಿ ಅಲ್ಲಿ ತೂಗು ನಿಂತಿದ್ದ ಭಾರಿ ಸ್ಫಟಿಕದ ಗೊಂಚಲು ದೀಪದ ಮೇಲೆ ಕುಳಿತಿತು. ಆಮೇಲೆ ತನ್ನ ಕೆದರಿದ ಪುಕ್ಕಗಳನ್ನು ನಯಗೊಳಿಸಿಕೊಳ್ಳ ತೊಡಗಿತು.

ಸಿಂಡರೆಲಾ ಬಾಗಿ ನಮಿಸಿದಳು, ಮುಗುಳು ನಕ್ಕಳು. ಈ ಸಿಂಡರೆಲಾ ತನ್ನ ಪ್ರೀತಿಯ ಅಮ್ಮ ಎಂದು ಮಾಷಳಿಗೆ ಗೊತ್ತಿದ್ದುದರಿಂದ ಸರಿಹೋಯಿತು. ಇಲ್ಲದಿದ್ದರೆ ಅವಳೇ ಸ್ವತಃ ಎಂದೂ ಅದನ್ನು ಊಹಿಸಿ ತಿಳಿಯಲಾಗುತ್ತಿರಲಿಲ್ಲ.

ಆ ರಾತ್ರಿ ತುಂಬ ಹೊತ್ತಾದ ಮೇಲೆ ಮಾಷ ಹಾಸಿಗೆಯ ಮೇಲೆ ಮಲಗಿ ಇನ್ನೇನು ನಿದ್ರಿಸಬೇಕೆನ್ನುವಾಗ ತನ್ನ ಅಮ್ಮನನ್ನು ಕೇಳಿದಳು:

"ನೀನು ಆ ತುರಾಯಿಯನ್ನು ನಿನ್ನ ಫ್ರಾಕಿಗೆ ಸಿಕ್ಕಿಸಿಕೊಂಡಾಗ ನಿನಗೆ ಅಪ್ಪನ ನೆನಪು ಬಂದಿತೆ?"

"ಹೌದು" ಅಮ್ಮ ಒಂದು ಘಳಿಗೆ ಸುಮ್ಮನಿದ್ದು ಹೇಳಿದಳು.

"ಹಾಗಾದರೆ ಯಾಕೆ ಅತ್ತೆ?"

"ಯಾಕೆಂದರೆ ಈ ಪ್ರಪಂಚದಲ್ಲಿ ನಿನ್ನ ಅಪ್ಪನಂಥ ಜನರಿದ್ದಾರಲ್ಲ ಎಂದು ನನಗೆ ತುಂಬ ಆನಂದವಾಯಿತು."

"ಅದು ಸುಳ್ಳು!" ಮಾಷ ಮಣಗುಟ್ಟಿದಳು. "ಆನಂದವಾದಾಗ ಜನ ನಗುತ್ತಾರೆ."

"ಆನಂದ ಸಣ್ಣ ಪ್ರಮಾಣದ್ದಾದರೆ ನಗುವಂತೆ ಮಾಡುತ್ತೆ. ದೊಡ್ಡ ಪ್ರಮಾಣದ್ದಾದರೆ ಅಳುವಂತೆ ಮಾಡುತ್ತೆ. ಸರಿ, ಈಗ ನೀನು ನಿದ್ರೆ ಮಾಡು!"

ಮಾಷ ನಿದ್ರೆ ಹೋದಳು.

ಅವಳ ತಾಯಿ ಕಿಟಕಿಯ ಬಳಿ ಹೋದಳು. ಪಾಷ್ಕ ಹೊರಗೆ ಮರದ ಕೊಂಬೆಯ ಮೇಲೆ ಕುಳಿತಿತ್ತು. ಅದೂ ನಿದ್ರಿಸುತ್ತಿತ್ತು. ಎಲ್ಲ ನಿಶ್ಶಬ್ದವಾಗಿತ್ತು. ಆಕಾಶದಿಂದ ಬೀಳುತ್ತಿದ್ದ ದೊಡ್ಡದೊಡ್ಡ ಮಂಜಿನ ಚಕ್ಕೆಗಳೂ ಈ ನೀರವತೆಯನ್ನು ಹೆಚ್ಚಿಸಿದ್ದವು. ಮಾಷಳ ಅಮ್ಮ ಅದನ್ನೇ ನೋಡುತ್ತ ನಿಂತು ಯೋಚಿಸಿದಳು – ಸುಂದರ ಕನಸುಗಳೂ ರಮ್ಯ ಕಥೆಗಳೂ ಜನರ ಬಳಿಗೆ ಬರುವುದೂ ಹೀಗೆಯೇ. ರಾತ್ರಿ ವೇಳೆಯ ಈ ಮಂಜಿನಂತೆಯೇ ಅವು ಮೃದುವಾಗಿ ತೇಲಿಕೊಂಡು ಬರುತ್ತವೆ.



